ಕರ್ನಾಟಕ ಸರ್ಕಾರ

ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **957**

ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾಗಿದ್ದ ದಿನಾಂಕ : **21.12.2021.**

ಉತ್ತರಿಸುವವರು : ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ | ರಾಜ್ಯದಲ್ಲಿನ ಸಾರ್ವಜನಿಕ ಉದ್ದಿಮೆಗಳು ಹಾಗೂ ಅವುಗಳ ಕಾರ್ಯ ಚಟುವಟಿಕೆಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ವ್ಯಾಪ್ತಿಯಲ್ಲಿ ಒಟ್ಟು 60 ಸಾರ್ವಜನಿಕ ಉದ್ದಿಮೆಗಳಿದ್ದು, ಅವುಗಳ ವಿವರ ಹಾಗೂ ಕಾರ್ಯಚಟುವಟಿಕೆಗಳನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ. |
| ಆ | ಸಾರ್ವಜನಿಕ ಉದ್ದಿಮೆಗಳ ವಾರ್ಷಿಕ ವಹಿವಾಟು ಎಷ್ಟು; ಉದ್ದಿಮೆಗಳ ಸದ್ಯದ ಆರ್ಥಿಕ ಸ್ಥಿತಿಗತಿಗಳೇನು; | ವಿವರವನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ. |
| ಇ | ನಷ್ಟದಲ್ಲಿರುವ ಉದ್ದಿಮೆಗಳು ಯಾವುವು; ಇದಕ್ಕೆ ಕಾರಣಗಳೇನು; ಸದರಿ ಉದ್ದಿಮೆಗಳನ್ನು ಪುನಃಶ್ಚೇತನಗೊಳಿಸಲು ಸರ್ಕಾರದ ನಿಲುವುಗಳೇನು? | 60 ಸಾರ್ವಜನಿಕ ಉದ್ದಿಮೆಗಳ ಪೈಕಿ ಪ್ರಸಕ್ತ ಸಾಲಿನಲ್ಲಿ ಒಟ್ಟು 21 ಉದ್ದಿಮೆಗಳು ನಷ್ಟದಲ್ಲಿದ್ದು, (ವಿವರವನ್ನು ಅನುಬಂಧ-3 ರಲ್ಲಿ ಲಗತ್ತಿಸಿದೆ.)<br>ನಷ್ಟ ಅನುಭವಿಸುತ್ತಿರುವ ಉದ್ದಿಮೆಗಳ ಪೈಕಿ, ಉದ್ದಿಮೆಗಳು ಸಾರ್ವಜನಿಕ ಸಾರಿಗೆ, ವಿದ್ಯುತ್ ಪ್ರಸರಣ, ನೀರಾವರಿ, ಮೂಲಭೂತ ಸೌಲಭ್ಯ ಅಭಿವೃದ್ಧಿ ಮತ್ತು ಸಾಮಾಜಿಕ ಅಭಿವೃದ್ಧಿ ಕ್ಷೇತ್ರದ ಉದ್ದಿಮೆಗಳಾಗಿದ್ದು, ಈ ಉದ್ದಿಮೆಗಳು ಸಮಾಜದ ಎಲ್ಲಾ ಸ್ಥರದ ನಾಗರಿಕರಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ಉದ್ದಿಮೆಗಳಾಗಿವೆ. ಈ ಉದ್ದಿಮೆಗಳ ಪುನಶ್ಚೇತನಕ್ಕೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ಹಲವು ಕ್ರಮಗಳನ್ನು ತೆಗೆದುಕೊಳ್ಳುತ್ತಿವೆ.<br>ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದ ಮುಖಾಂತರ, ನಷ್ಟದಲ್ಲಿರುವ ಉದ್ದಿಮೆಗಳ ಮೌಲ್ಯಮಾಪನ ನಡೆಸುತ್ತದೆ ಹಾಗೂ ಈ ಇಲಾಖೆಯ ವತಿಯಿಂದ ಸಾರ್ವಜನಿಕ ಉದ್ದಿಮೆಗಳ ಅಧಿಕಾರಿ/ನೌಕರ ವರ್ಗದವರ ಕಾರ್ಯಕ್ಷಮತೆ ಹೆಚ್ಚಿಸಲು ತರಬೇತಿ ಕಾರ್ಯಕ್ರಮವನ್ನು ಆಯೋಜಿಸಲಾಗುತ್ತದೆ. ಸದರಿ ಪ್ರಾಧಿಕಾರವು ಸೂಚಿಸುವ ಕ್ರಮಗಳನ್ನು ಕಾರ್ಯಗತಗೊಳಿಸಿ, ಉದ್ದಿಮೆಗಳ ಪುನಶ್ಚೇತನಕ್ಕೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ಕ್ರಮವಹಿಸುತ್ತಿವೆ. |

ಸಾಉಇ **25** ಎಲ್ ಸಿ ಯು **2021**

(ಎನ್. ನಾಗರಾಜು)(ಎಂಟಿಬಿ)

ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆ ಹಾಗೂ

ಸಾರ್ವಜನಿಕ ಉದ್ದಿಮೆಗಳ ಸಚಿವರು

# ಅನುಬಂಧ - 1

**ಕರ್ನಾಟಕ ರಾಜ್ಯದ 60 ಸಾರ್ವಜನಿಕ ಉದ್ಯಮಗಳ ಹೆಸರು ಹಾಗೂ ಕಾರ್ಯಚಟುವಟಿಕೆಗಳ ವಿವರ:**

| ಕ್ರ. ಸಂ. | ಸಾರ್ವಜನಿಕ ಉದ್ದಿಮೆಗಳ ಹೆಸರು | ಕಾರ್ಯಚಟುವಟಿಕೆಗಳು |
|---|---|---|
| 1 | ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಷನ್ ಲಿಮಿಟೆಡ್ ನಿಯಮಿತ | ಸಂಸ್ಥೆಯು ಖನಿಜ ಮತ್ತು ಅದಿರುಗಳ ಪರಿಶೋಧನೆ ಹಾಗೂ ಅದಿರು ಮತ್ತು ಖನಿಜಗಳನ್ನು ಹೊರತೆಗೆದು ಮಾರಾಟ ಮಾಡುವ ಸರ್ಕಾರದ ಪ್ರಮುಖ ಉದ್ದಿಮೆಯಾಗಿದೆ. |
| 2 | ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ | ಕಂಪನಿಯು ಗಣಿಗಾರಿಕೆಯ ಚಟುವಟಿಕೆಯಿಂದ ಚಿನ್ನದ ಅದಿರನ್ನು ಉತ್ಪಾದಿಸಿ, ಅದನ್ನು ಸಂಸ್ಕರಿಸಿ ಚಿನ್ನವನ್ನು ತಯಾರಿಸಲಾಗುತ್ತದೆ. |
| 3 | ಕರ್ನಾಟಕ ಸಾಬೂನು ಮತ್ತು ಮಾರ್ಜಕ | ಸಂಸ್ಥೆಯು ಶ್ರೀಗಂಧದೆಣ್ಣೆ, ಮೈಸೂರು ಸ್ಯಾಂಡಲ್ ಸಾಬೂನು, ಮಾರ್ಜಕಗಳು, ಸೌಂದರ್ಯವರ್ಧಕಗಳು, ಅಗರಬತ್ತಿ, ಧೂಪ್, ಹ್ಯಾಂಡ್ ವಾಷ್, ಸ್ಯಾನಿಟೈಸರ್ ಇತರೆ ಉತ್ಪನ್ನಗಳನ್ನು ತಯಾರಿಸಿ ಮಾರಾಟ ಮಾಡುವ ಕಾರ್ಯಚಟುವಟಿಕೆಗಳಲ್ಲಿ ತೊಡಗಿರುತ್ತದೆ. |
| 4 | ಮೈಸೂರ್ ಪೇಯಿಂಟ್ಸ್ & ವಾರ್ನಿಷ್ ಲಿ. | ವಿವಿಧ ಬಣ್ಣಗಳು ಮತ್ತು ಅಳಿಸಲಾಗದ ಶಾಯಿ ತಯಾರಿಕೆಯ ಉದ್ದಿಮೆಯಾಗಿರುತ್ತದೆ. |
| 5 | ಕರ್ನಾಟಕ ವಿದ್ಯುತ್ ಕಾರ್ಖಾನೆ ನಿಯಮಿತ | ನಿಯಮಿತವು ಎಸ್ಕಾಂಗಳ ಬೇಡಿಕೆಗೆ ಅನುಗುಣವಾಗಿ ವಿವಿಧ ಸಾಮರ್ಥ್ಯದ (25,63,100,250 & 500 ಕೆವಿಎ) ಸ್ಟಾರ್ 2 ವರ್ಗಗಳ ವಿದ್ಯುತ್ ವಿತರಣಾ ಪರಿವರ್ತಕಗಳನ್ನು ಉತ್ಪಾದಿಸುತ್ತದೆ. |
| 6 | ದಿ ಮೈಸೂರ್ ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ಲಿಮಿಟೆಡ್ | ಸಂಸ್ಥೆಯು ಸ್ವಿಚ್‌ಗೇರ್‌ಗಳನ್ನು ಉತ್ಪಾದನೆ ಮಾಡಿ ಕೆಪಿಟಿಸಿಎಲ್, ಎಸ್ಕಾಂ ಮತ್ತು ಇತರ ಕಂಪನಿಗಳಿಗೆ ಸರಬರಾಜು ಮಾಡಲಾಗುತ್ತಿದೆ. |
| 7 | ಮೈಸೂರು ಕಾಗದ ಕಾರ್ಖಾನೆ ನಿಯಮಿತ ಲಿಮಿಟೆಡ್ | ಸಂಸ್ಥೆಯು ಕಾಗದ ಮತ್ತು ಸಕ್ಕರೆ ಉತ್ಪಾದನಾ ಘಟಕವಾಗಿದೆ. |
| 8 | ಮೈಸೂರು ಸಕ್ಕರೆ ಕಂಪನಿ  ನಿಯಮಿತ | ಸಕ್ಕರೆ ಉತ್ಪಾದನಾ ಘಟಕವಾಗಿರುತ್ತದೆ. |
| 9 | ಎನ್ ಜಿಇಎಫ್ (ಹುಬ್ಬಳ್ಳಿ ) ನಿಯಮಿತ | ಸಂಸ್ಥೆಯು ಎಲೆಕ್ಟ್ರಿಕಲ್ ಇಂಡಕ್ಷನ್ ಮೋಟಾರ್ಸ್ ಮತ್ತು ಟ್ರಾನ್ಸ್‌ಫಾರ್ಮರುಗಳ ಉತ್ಪಾದನೆ ಹಾಗೂ ದುರಸ್ತಿ ಕಾರ್ಯಚಟುವಟಿಕೆಗಳನ್ನು ನಡೆಸುತ್ತಿದೆ. |
| 10 | ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು  ಮೂಲಸೌಲಭ್ಯ ಅಭಿವೃದ್ಧಿ ಯೋಜನೆಗಳ ಪಥದಲ್ಲಿ ಈ ಕೆಳಕಂಡ ಯೋಜನೆಗಳ ಅಭಿವೃದ್ಧಿ ಚಟುವಟಿಕೆಗಳತ್ತ ಗಮನ ಹರಿಸಿದೆ: |

| | | |
|---|---|---|
| | | • ಬೆಂಗಳೂರು ಅಂತರ್ ರಾಷ್ಟ್ರೀಯ ವಿಮಾನ ನಿಲ್ದಾಣದ ವಿಸ್ತರಣೆ<br>• ಬೆಂ. ಅಂತರ್ ರಾಷ್ಟ್ರೀಯ ವಿಮಾನ ನಿಲ್ದಾಣದ ಪಕ್ಕದಲ್ಲಿ ಬೆಂ. ಅಂತರ್ ರಾಷ್ಟ್ರೀಯ ಸಮ್ಮೇಳನ ಕೇಂದ್ರದ ಸಂಕೀರ್ಣ ಸ್ಥಾಪನೆ<br>• ದೇವನಹಳ್ಳಿಯ ಉದ್ಯಮ ಪಾರ್ಕ್ ಅಭಿವೃದ್ಧಿ<br>• ವಿಮಾನ ನಿಲ್ದಾಣ ಮತ್ತು ಕಿರು ವಿಮಾನ ನಿಲ್ದಾಣ ಅಭಿವೃದ್ಧಿ<br>ಜೊತೆಗೆ ಕಾಲಕಾಲಕ್ಕೆ ನಿಗಧಿತ ಯೋಜನೆಗಳಿಗೆ ಸಂಬಂಧಿಸಿದಂತೆ ಸಂಸ್ಥೆಯು ರಾಜ್ಯ ಸರ್ಕಾರದ ಸಂಪರ್ಕ ಸೇತುವಾಗಿ ಕಾರ್ಯ ಮುಂದುವರೆಸುತ್ತಿದ್ದು ಮೂಲ ಸೌಕರ್ಯದೊಂದಿಗೆ ಓಟಿಎಸ್ ಅಡಿಯಲ್ಲಿ ಉಳಿದ ಸಾಲ ಖಾತೆಗಳ ಇತ್ಯರ್ಥ, ವಿಭಾಗ 29ರ ಅಡಿಯಲ್ಲಿ ತೆಗೆದುಕೊಂಡ ಪ್ರಾಥಮಿಕ ಸ್ವತ್ತುಗಳ ಮಾರಾಟ, ಎಸ್‌ಎಫ್‌ಸಿ ಮತ್ತು ಇತರೆ ಖಾಯಿದೆಗಳ ಅಡಿಯಲ್ಲಿ ಕಾನೂನು ರಹಿತ ಪ್ರಗತಿಯ ಪುನರ್‌ಶ್ಚೇತನ. |
| 11 | ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ | ಸಂಸ್ಥೆಯು ಉತ್ತಮ ಮೂಲ ಸೌಕರ್ಯಗಳೊಂದಿಗೆ ಕೈಗಾರಿಕಾ ವಸಾಹತುಗಳನ್ನು ಸ್ಥಾಪಿಸಿ, ಅಲ್ಲಿ ಕೈಗಾರಿಕಾ ಮಳಿಗೆಗಳು ಹಾಗೂ ಕೈಗಾರಿಕಾ ನಿವೇಶನಗಳನ್ನು ಅಭಿವೃದ್ಧಿ ಪಡಿಸಿ, ಕೈಗಾರಿಕೋದ್ಯಮಗಳಿಗೆ ಹಂಚಿಕೆ ಮಾಡಿ, ಕೈಗಾರಿಕೆಗಳ ಸ್ಥಾಪನೆಗೆ ಅನುಕೂಲ ಮಾಡಿಕೊಡುವುದು ಹಾಗೂ ಕೈಗಾರಿಕೋದ್ಯಮಿಗಳಿಗೆ ಉಕ್ಕು ಮತ್ತು ಕಬ್ಬಿಣ ಖರೀದಿಸಿ ಸರಬರಾಜು ಮಾಡುವ ಕಾರ್ಯಚಟುವಟಿಕೆ ಹೊಂದಿರುತ್ತದೆ. |
| 12 | ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ಕರ್ನಾಟಕ ರಾಜ್ಯದ ಪಾರಂಪರಿಕ ಕರಕುಶಲ ಕಲೆಯನ್ನು ಉಳಿಸಿ, ಬೆಳೆಸಿ ಮತ್ತು ಅಭಿವೃದ್ಧಿಪಡಿಸುವುದು. ನಿಗಮದ ವಿವಿಧ ಸ್ಥಳಗಳಲ್ಲಿರುವ 13 ಕಲಾ ಸಂಕೀರ್ಣಗಳ ಮೂಲಕ ಸದರಿ ಕರಕುಶಲ ಕಲೆಗೆ ಸಂಬಂಧಿಸಿದ ರಾಜ್ಯಾದ್ಯಾಂತ ಇರುವ ಕರಕುಶಲಕರ್ಮಿಗಳನ್ನು ಗುರುತಿಸಿ, ನೋಂದಾಯಿಸಿ, ಕಲೆಗೆ ಪ್ರೋತ್ಸಾಹಿಸುವುದು. ಶಿಲ್ಪಗುರುಕುಲದ ಮೂಲಕ ವಿದ್ಯಾರ್ಥಿಗಳಿಗೆ 02 ವರ್ಷದ ಕಲ್ಲು ಮತ್ತು ಮರದ ಕೆತ್ತನೆಯಲ್ಲಿ ತರಬೇತಿಯನ್ನು ನೀಡುವುದು(ಉಚಿತ ಶಿಕ್ಷಣ ಮತ್ತು ವಸತಿ ಸೌಲಭ್ಯದೊಂದಿಗೆ) ನಿಗಮದ 12 ಕಾವೇರಿ ಮಾರಾಟ ಮಳಿಗೆಗಳಲ್ಲಿ ಕರಕುಶಲಕರ್ಮಿಗಳಿಗೆ ಮತ್ತು ಕರಕುಶಲ ವಸ್ತುಗಳನ್ನು ಗುಣಮಟ್ಟ, ದರಗಳಲ್ಲಿ ಪಾರದರ್ಶಕತೆ ಕಾಪಾಡಿ ಮಾರಾಟ ಮಾಡುವುದು. |
| 13 | ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ರಾಜ್ಯದಲ್ಲಿ ಜವಳಿ ಕ್ಷೇತ್ರದ ಅಭಿವೃದ್ಧಿಗಾಗಿ ಅಗತ್ಯವಾದ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿ ಪಡಿಸುವುದಾಗಿದೆ. |
| 14 | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ | ಸಂಸ್ಥೆಯು ರಾಜ್ಯದಾದ್ಯಂತ ಇರುವ ನೇಕಾರರಿಗೆ ಕಚ್ಚಾಮಾಲನ್ನು ಪೂರೈಸಿ, ಅವರಿಂದ ಪಕ್ಕಾಮಾಲು ಸ್ವೀಕರಿಸಿ, ಮಜೂರಿಯನ್ನು ವಿತರಿಸಲಾಗುತ್ತದೆ. |

| | | |
|---|---|---|
| 15 | ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿಯಮಿತ | ➢ ನಿಗಮವು ರಾಜ್ಯದ ತೆಂಗಿನ ನಾರಿನ ಕ್ಷೇತ್ರದ ಅಭಿವೃದ್ಧಿಗಾಗಿ ಗ್ರಾಮೀಣ ಪ್ರದೇಶದಲ್ಲಿ ಅರ್ಹ ಫಲಾನುಭವಿಗಳಿಗೆ ತರಬೇತಿ ನಂತರ ಉತ್ಪಾದನೆಯಲ್ಲಿ ತೊಡಗಿಸಿಕೊಂಡು ನಿರಂತರ ಉದ್ಯೋಗವಕಾಶಕ್ಕೆ ಅನುವು ಮಾಡಿಕೊಡುವುದು.<br>➢ ಗ್ರಾಮೀಣ ಪ್ರದೇಶದಲ್ಲಿ ಯತೇಚ್ಚವಾಗಿ ಲಭ್ಯವಿರುವ ತೆಂಗು ಸಂಪನ್ಮೂಲವನ್ನು ಮೌಲ್ಯಾಧಾರಿತ ಉತ್ಪನ್ನಗಳ ತಯಾರಿಕೆಯಲ್ಲಿ ಬಳಸಿಕೊಳ್ಳುವುದು. ಇದರಿಂದ ರೈತರಿಗೆ ಆರ್ಥಿಕ ಸುಧಾರಣೆಗೆ ಅನುವು ಮಾಡಿಕೊಡುವುದು.<br>➢ ನಾರು ಹಾಗೂ ನಾರಿನ ಉತ್ಪನ್ನಗಳಿಗೆ ಸ್ಥಳೀಯ ಮಾರುಕಟ್ಟೆ ಜೊತೆಗೆ ರಫ್ತು ಮಾರುಕಟ್ಟೆ ಕಲ್ಪಿಸಿಕೊಡುವುದು.<br>➢ ನಾರಿನಿಂದ ಕಾಯರ್ ವಿನೀಯರ್ ಬೋರ್ಡ್‌ಗಳನ್ನು ತಯಾರಿಸಿ, ಕಿಟಕಿ ಬಾಗಿಲು, ಶಾಲಾ ಡೆಸ್ಕ್ ಗಳು, ಟೇಬಲ್ಗಳು ಹಾಗೂ ಇತರೆ ಪೀಠೋಪಕರಣಗಳ ತಯಾರಿಕೆಗೆ ಉಪಯೋಗಿಸಿ, ಕಾಡಿನ ಮರಗಳ ಅವಲಂಬತೆ ಕಡಿಮೆಗೊಳಿಸಿ, ಅರಣ್ಯ ಸಂರಕ್ಷಣೆಗೆ ಒತ್ತು ನೀಡುವುದು.<br>➢ ರಬ್ಬರೀಕೃತ ತೆಂಗಿನ ನಾರಿನ ಹಾಸಿಗೆ ಮತ್ತು ದಿಂಬುಗಳ ತಯಾರಿಕೆಗೆ ಕ್ರಮ ಕೈಗೊಳ್ಳುವುದು. |
| 16 | ಮೆ.ಮಾರ್ಕೆಟಿಂಗ್ ಕಮ್ಯುನಿಕೇಷನ್ ಅಂಡ್ ಅಡ್ವರ್ಟೈಸಿಂಗ್ ಲಿಮಿಟೆಡ್ | ಸಂಸ್ಥೆಯು ಎಲ್ಲಾ ಇಲಾಖೆಯ, ನಿಗಮ ಮತ್ತು ಮಂಡಳಿಗಳಿಗೆ ಜಾಹೀರಾತು ಮತ್ತು ಇತರೆ ಪೂರಕ ಸೇವೆಗಳನ್ನು ಒದಗಿಸುತ್ತಿದೆ. |
| 17 | ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ | ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳು ಉತ್ಪಾದಿಸುವ ಕೈಗಾರಿಕೋತ್ಪನ್ನ ಮತ್ತು ಗ್ರಾಹಕೋತ್ಪನ್ನ ವಸ್ತುಗಳನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ಮಾರ್ಕೆಟಿಂಗ್ ಸಂಸ್ಥೆಯಾಗಿರುತ್ತದೆ. |
| 18 | ಕರ್ನಾಟಕ ವಿದ್ಯುತ್ ನಿಗಮ ನಿಯಮಿತ | ಸಂಸ್ಥೆಯು ಜಲ, ಶಾಖೋತ್ಪನ್ನ, ಸೌರ ಹಾಗೂ ಪವನ ಶಕ್ತಿ ಮೂಲಗಳಿಂದ ವಿದ್ಯುತ್ ಉತ್ಪಾದನೆಯಲ್ಲಿ ತೊಡಗಿಸಿಕೊಂಡಿದೆ. |
| 19 | ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ | ಸಾರ್ವಜನಿಕ ಉದ್ದಿಮೆಯಾಗಿದ್ದು, 400/220/110/66 ಕೆ.ವಿ. ವಿದ್ಯುತ್ ಉಪಕೇಂದ್ರಗಳು ಮತ್ತು ವಿದ್ಯುತ್ ಪ್ರಸರಣ ಮಾರ್ಗಗಳ ನಿರ್ಮಾಣ ಮತ್ತು ನಿರ್ವಹಣೆಗಳು ಈ ಉದ್ದಿಮೆಯ ಕಾರ್ಯಚಟುವಟಿಕೆಗಳಾಗಿರುತ್ತದೆ. |
| 20 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ | ಕಂಪನಿಯು ಕರ್ನಾಟಕ ರಾಜ್ಯದ 08 ಜಿಲ್ಲೆಗಳಾದ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ, ಚಿಕ್ಕಬಳ್ಳಾಪುರ, ಕೋಲಾರ, ತುಮಕೂರು, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಿಗೆ ವಿದ್ಯುತ್ ಸರಬರಾಜು ಮಾಡುವ ಜವಾಬ್ದಾರಿಯನ್ನು ಹೊಂದಿದೆ. |
| 21 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ | ಕಂಪನಿಯು ಉತ್ತರ ಕರ್ನಾಟಕದ ಧಾರವಾಡ, ಬೆಳಗಾವಿ, ಹಾವೇರಿ, ಗದಗ, ಉತ್ತರಕನ್ನಡ, ಬಾಗಲಕೋಟ ಮತ್ತು ವಿಜಯಪುರ ಜಿಲ್ಲೆಗಳಲ್ಲಿ ವಿದ್ಯುತ್ ಪೂರೈಕೆಯ ಸೇವೆಯನ್ನು ಒದಗಿಸುತ್ತಿದೆ. |
| 22 | ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿ ನಿಯಮಿತ | ರಾಜ್ಯದ ನಾಲ್ಕು ಜಿಲ್ಲೆಗಳಾದ ದಕ್ಷಿಣ ಕನ್ನಡ, ಉಡುಪಿ, ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಗಳ ಗ್ರಾಹಕರಿಗೆ ವಿದ್ಯುತ್ ಸರಬರಾಜು ಮಾಡುವ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ. |

| | | |
|---|---|---|
| 23 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ | ನಿಗಮವು ಮೈಸೂರು, ಚಾಮರಾಜನಗರ, ಕೊಡಗು, ಮಂಡ್ಯ ಹಾಗೂ ಹಾಸನ ಜಿಲ್ಲೆಗಳ ವ್ಯಾಪ್ತಿಯ ಗ್ರಾಹಕರಿಗೆ ಸ್ಪರ್ಧಾತ್ಮಕ ದರದಲ್ಲಿ ಗುಣಮಟ್ಟದ ವಿದ್ಯುಚ್ಛಕ್ತಿಯನ್ನು ಒದಗಿಸುವ ಕಾರ್ಯವನ್ನು ನಿರ್ವಹಿಸುತ್ತದೆ. |
| 24 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ | ಕಂಪನಿಯು ಕಲ್ಯಾಣ ಕರ್ನಾಟಕ ಪ್ರದೇಶದ ಬೀದರ್, ಕಲಬುರಗಿ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ ಮತ್ತು ವಿಜಯನಗರ ಜಿಲ್ಲೆಗಳಲ್ಲಿ ಹೊಸ ವಿದ್ಯುತ್ ಸಂಪರ್ಕ ನೀಡುವುದು ಮತ್ತು ವಿದ್ಯುತ್ ಸರಬರಾಜು ಮಾಡುವ ಕಾರ್ಯನಿರ್ವಹಿಸುತ್ತಿದೆ. |
| 25 | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಿತ | ರಾಜ್ಯದ ಸಾರ್ವಜನಿಕರಿಗೆ ಸುವ್ಯವಸ್ಥಿತ ಸಮರ್ಪಕ ಸಾರಿಗೆ ಸೇವೆಯನ್ನು ಮಿತವ್ಯಯದಲ್ಲಿ ಒದಗಿಸುವುದು ಕ.ರಾ.ರ.ಸಾ.ನಿಗಮದ ಮುಖ್ಯ ಕಾರ್ಯ ಚಟುವಟಿಕೆಯಾಗಿರುತ್ತದೆ. |
| 26 | ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ | ನಿಗಮವು ಸಾರ್ವಜನಿಕ ಪ್ರಯಾಣಿಕರಿಗೆ ಸುರಕ್ಷಿತ, ಸಮರ್ಥ, ಮಿತವ್ಯಯ ಸಮರ್ಪಕ ಹಾಗೂ ಸಮನ್ವಯ ಉಳ್ಳ ಸಾರಿಗೆಯನ್ನು ಕಲ್ಪಿಸುವ ಕಾರ್ಯ ನಿರ್ವಹಿಸುತ್ತಿದೆ. |
| 27 | ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ | ಸಾರ್ವಜನಿಕ ಪ್ರಯಾಣಿಕರಿಗೆ ಸುರಕ್ಷಿತ ಸಮರ್ಥ, ಮಿತವ್ಯಯ ಮತ್ತು ಸಮರ್ಪಕ ಹಾಗೂ ಸಮನ್ವಯ ಉಳ್ಳ ಸಾರಿಗೆಯನ್ನು ಕಲ್ಪಿಸುವುದು. |
| 28 | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ | ಸಂಸ್ಥೆಯು ಬೆಂಗಳೂರು ನಗರ ಮತ್ತು ಸುತ್ತಮುತ್ತಲಿನ ಪ್ರದೇಶದ ಸಾರ್ವಜನಿಕ ಪ್ರಯಾಣಿಕರಿಗೆ ಉತ್ತಮ, ಮಿತವ್ಯಯ ಮತ್ತು ಸುರಕ್ಷಿತ ಸಾರಿಗೆ ವ್ಯವಸ್ಥೆಯನ್ನು ಕಲ್ಪಿಸುವುದು. |
| 29 | ಡಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್ | ಸಂಸ್ಥೆಯು ಬೆಂಗಳೂರು ನಗರ ಸೇರಿದಂತೆ ರಾಜ್ಯದ ಇತರ ನಗರಗಳಲ್ಲಿ ಟ್ರಕ್ ಟರ್ಮಿನಲ್ ನಿರ್ಮಾಣ, ನಿರ್ವಹಣೆ ಕರ್ತವ್ಯಗಳನ್ನು ನಿರ್ವಹಿಸುತ್ತಿದೆ. |
| 30 | ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ | ಸಕಾಲದಲ್ಲಿ ಕರ್ನಾಟಕ ರಾಜ್ಯದ ರೈತರಿಗೆ ಅನುಕೂಲವಾಗುವಂತೆ ವಿವಿಧ ಬೆಳೆ ತಳಿಗಳ ಬೀಜೋತ್ಪಾದನೆ ಹಾಗೂ ಮಾರಾಟವನ್ನು ಕರ್ನಾಟಕ ಸರ್ಕಾರದ ಕೃಷಿ ಇಲಾಖೆಯ ಸಹಯೋಗದೊಂದಿಗೆ ನಿರ್ವಹಿಸುತ್ತಿದೆ. |
| 31 | ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗೂ ರಫ್ತು ನಿಗಮ ನಿಯಮಿತ | • ಕೃಷಿ ತೋಟಗಾರಿಕೆ ಮತ್ತು ಪುಷ್ಪೋದ್ಯಮದ ಅಭಿವೃದ್ಧಿ, ಪದೋನ್ನತಿ, ಸಂಸ್ಕರಣೆ ಹಾಗೂ ರಫ್ತಿಗೆ ಅನುಕೂಲ ಕಲ್ಪಿಸುವುದು.<br>• ಕೃಷಿ ಹಾಗೂ ತೋಟಗಾರಿಕೆ ಉತ್ಪನ್ನಗಳ ಕೋಯ್ಲಿನ ನಂತರದ ನಿರ್ವಹಣೆಗೆ ಅವಶ್ಯವಾದ ಮೂಲಭೂತ ಸೌಕರ್ಯಗಳನ್ನು ನಿರ್ಮಾಣ ಮಾಡುವುದು ಹಾಗೂ ಖಾಸಗಿಯವರಿಗೆ ನಿರ್ಮಿಸಲು ಪ್ರೋತ್ಸಾಯಿಸುವುದು.<br>• ರೈತರು, ವಿಜ್ಞಾನಿಗಳ ಮತ್ತು ಹಣಕಾಸು ಸಂಸ್ಥೆಯ ಅಧಿಕಾರಿಗಳನ್ನು ಒಳಗೊಂಡ ಸಭೆಗಳನ್ನು ನಡೆಸಿ ರೈತರಿಗೆ ಅವರಲ್ಲಿ ಕೃಷಿ ಉತ್ಪನ್ನಗಳ ರಫ್ತಿನಿಂದಾಗುವ ಅನುಕೂಲಗಳ ಬಗ್ಗೆ ತಿಳಿಸುವುದು.<br>• ಸರ್ಕಾರದಿಂದ ಘೋಷಿಸಲ್ಪಡುವ ಕೋಯ್ಲಿನ ನಂತರದ ಮೂಲಭೂತ ಸೌಕರ್ಯಗಳಿಗೆ ಸಂಬಂಧಿಸಿದ ಯೋಜನೆಗಳ |

| | | |
|---|---|---|
| | | ಅನುಷ್ಠಾನಕ್ಕೆ ನೋಡಲ್ ಏಜನ್ಸಿಯಾಗಿ ಕಾರ್ಯ ನಿರ್ವಹಣೆ ಅಥವಾ ಕಾಲ ಕಾಲಕ್ಕೆ ಸರ್ಕಾರವು ನಿಯೋಜಿಸುವ ಚಟುವಟಿಕೆಗಳು.<br>• ರೈತರಿಗೆ, ರೈತರ ಸಂಸ್ಥೆಗಳಿಗೆ, ಭಾವೀ ಉದ್ದಿಮೆದಾರರಿಗೆ ರಫ್ತು ವ್ಯಾಪಾರ ಪ್ರಾರಂಭಿಸಲು ಹಾಗೂ ಕೃಷಿ ಸಂಸ್ಕರಣೆ ಘಟಕಗಳನ್ನು ಸ್ಥಾಪಿಸಲು ಅವಶ್ಯಕವಿರುವ ಮಾರ್ಗದರ್ಶನ ನೀಡುವುದು. |
| 32 | ಕರ್ನಾಟಕ ರಾಜ್ಯ ದ್ವಿದಳ ಧಾನ್ಯಗಳ ಅಭಿವೃದ್ಧಿ ಮಂಡಳಿ ನಿಯಮಿತ | ಕೇಂದ್ರ ಸರ್ಕಾರ ಘೋಷಿಸಿದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಪ್ರತಿ ಕ್ವಿಂಟಾಲ್ ದರದಲ್ಲಿ ಹಾಗೂ ರಾಜ್ಯ ಸರ್ಕಾರದ ಪ್ರೋತ್ಸಾಹ ಧನವು ಸೇರಿ ಒಟ್ಟು ಮೊತ್ತದಲ್ಲಿ, ರೈತರಿಂದ ನೇರವಾಗಿ ತೊಗರಿ ಖರೀದಿಸಿ ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗುತ್ತಿದೆ.<br>**ಚಟುವಟಿಕೆಗಳು:**<br>1. ತರಬೇತಿ ಕಾರ್ಯಕ್ರಮಗಳನ್ನು ಜರುಗಿಸುವುದು.<br>2. ಸಂಶೋಧನೆಗಳನ್ವಯ ತಾಂತ್ರಿಕತೆಯನ್ನು ರೈತರಿಗೆ ತಿಳಿಯಪಡಿಸುವುದು.<br>3. ಬೀಜೋತ್ಪಾದನಾ ಕಾರ್ಯಕ್ರಮಗಳಿಗೆ ಸಹಕರಿಸುವುದು.<br>4. ಬೆಂಬಲ ಬೆಲೆ ಯೋಜನೆಯಡಿ ಮಾರುಕಟ್ಟೆ ಮಧ್ಯಪ್ರವೇಶ ಕಾರ್ಯಕ್ರಮದಡಿ ತೊಗರಿಯನ್ನು ರೈತರಿಂದ ನೇರವಾಗಿ ಖರೀದಿಸುವುದು. |
| 33 | ಕರ್ನಾಟಕ ಕಾಂಪೋಸ್ಟ್ ಅಭಿವೃದ್ಧಿ ನಿಗಮ ನಿಯಮಿತ | ನಿಗಮದ ಘಟಕದಲ್ಲಿ ಹಸಿ ತ್ಯಾಜ್ಯವನ್ನು ಸ್ವೀಕರಿಸುತ್ತಿದ್ದು, ಅದರ ಸಾಮರ್ಥ್ಯ 350 ಮೆ.ಟ. ಇದ್ದು ಸರಾಸರಿ ಪ್ರತಿ ದಿನ 115 ಮೆ.ಟ. ಕಸ ಸ್ವೀಕರಿಸಲಾಗುತ್ತಿದೆ. ಹಸಿ ತ್ಯಾಜ್ಯದಿಂದ ಗೊಬ್ಬರ ಉತ್ಪಾದನೆ ಮಾಡಿ ಕೃಷಿ ಇಲಾಖೆಯ ಮುಖಾಂತರ ರೈತರಿಗೆ ಅತೀ ಕಡಿಮೆ ಬೆಲೆಯಲ್ಲಿ ರೂ.200/- ಪ್ರತಿ ಟನ್‌ಗೆ ರೈತರಿಂದ ತೆಗೆದುಕೊಂಡು ವಿತರಣೆ ಮಾಡಲಾಗುತ್ತಿದೆ. |
| 34 | ಕಾವೇರಿ ನೀರಾವರಿ ನಿಗಮ ನಿಯಮಿತ | ನಿಗಮವು ಕಾವೇರಿ ಜಲಾನಯನ ಪ್ರದೇಶಗಳಲ್ಲಿ ಬರುವ ಬೃಹತ್ ಮತ್ತು ಮಧ್ಯಮ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸಿ ಗ್ರಾಮೀಣ ಪ್ರದೇಶಗಳಿಗೆ ನೀರಾವರಿ ಸೌಲಭ್ಯಗಳನ್ನು ಒದಗಿಸುವುದಾಗಿರುತ್ತದೆ. |
| 35 | ಕರ್ನಾಟಕ ನೀರಾವರಿ ನಿಗಮ ನಿಯಮಿತ | ನಿಗಮದ ಪರಧಿಗೆ ಬರುವ ಎಲ್ಲಾ ನೀರಾವರಿ ಯೋಜನೆಗಳನ್ನು ತಾಂತ್ರಿಕ ಸ್ಟಾಂಡರ್ಡ್ಸ್‌ಗಳಿಗೆ ಅನುಗುಣವಾಗಿ ಅನುಷ್ಠಾನಗೊಳಿಸುವುದು, ಆಧುನಿಕ ನೀರಾವರಿಗಳನ್ನು ಅಳವಡಿಸಿಕೊಳ್ಳುವುದು, ಹರಿ ನೀರಾವರಿ, ಏತ ನೀರಾವರಿ ಮತ್ತು ಪ್ರವಾಹ ನಿಯಂತ್ರಿಸುವುದು, ನೀರಾವರಿ ಯೋಜನೆಯ ಅನುಷ್ಠಾನದಿಂದ ಬಾಧಿತರಾದವರಿಗೆ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಲ್ಪಿಸುವುದು ಮತ್ತು ರೈತರು ನೀರು ಉಪಯುಕ್ತವಾಗುವಂತೆ ಬಳಸಿಕೊಳ್ಳುವಂತಹ ಸ್ಕೀಮ್ ಗಳನ್ನು |

| | | |
|---|---|---|
| | | ಉತ್ತೇಜಿಸುವುದು ಇತ್ಯಾದಿ ಕಾರ್ಯಚಟುವಟಿಕೆಗಳನ್ನು ನಿರ್ವಹಿಸುತ್ತಿದೆ. |
| 36 | ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ | ನಿಗಮವು ಕೃಷ್ಣಾ ನದಿ ಪಾತ್ರದಲ್ಲಿನ ಕೃಷ್ಣಾ ಮೇಲ್ದಂಡೆ ಯೋಜನೆ ಹಾಗೂ ಸರ್ಕಾರವು ಕಾಲ ಕಾಲಕ್ಕೆ ವಹಿಸುವ ಇತರೆ ನೀರಾವರಿ ಯೋಜನೆಗಳನ್ನು ಜಾರಿಗೊಳಿಸಿ, ನಿರ್ವಹಿಸಿ ನೀರಾವರಿಗಾಗಿ ನೀರನ್ನು ಒದಗಿಸುವುದಾಗಿದೆ. |
| 37 | ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ | ➢ ಕೈಗಾರಿಕಾ ಅಭಿವೃದ್ಧಿ ಮೂಲ ಆಧಾರವಾಗಿ ಅರಣ್ಯ ಭೂಮಿಯನ್ನು ಅಭಿವೃದ್ಧಿ ಪಡಿಸುವುದು, ವಿಶೇಷವಾಗಿ ಅಕೇಶಿಯಾ, ಕ್ಯಾಸುರಿನಾ,ಸುಬಾಬುಲ್, ಹೆಬ್ಬೇವು ಬಿದಿರು, ಹುಣಸೇ, ರಬ್ಬರ್ ತಳಿಗಳನ್ನು ಕರ್ನಾಟಕದಲ್ಲಿ ಬೆಳಸುವುದು.<br>➢ ಅರಣೀಕರಣಕ್ಕೆ ಪೂರಕವಾದ ಮತ್ತು ವ್ಯವಸಾಯ ಸಂಬಂಧ ಮತ್ತು ಪ್ರಾಕೃತಿಕ ವನಗಳಲ್ಲಿ ಮರಗಳ ಉತ್ಪನ್ನಗಳ ಮಾರಾಟ, ಸಂಸ್ಕರಣೆ, ಹಂಚಿಕೆ ಮಾಡುವುದು.<br>➢ ನೆಡುತೋಪುಗಳನ್ನು ಬೆಳೆಸುವ ಚಟುವಟಿಕೆ, ಮರಮುಟ್ಟು, ಪ್ಲೈವುಡ್, ಮ್ಯಾಚ್‌ವುಡ್ ಮತ್ತು ಇತರ ಉತ್ಪನ್ನಗಳ ತಯಾರಿಕಾ ಸಂಸ್ಥೆಗಳಿಗೆ ಮಾರಾಟ ಮತ್ತು ವಿನಿಯೋಗ ಮಾಡುವುದು. |
| 38 | ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ | ಸರ್ಕಾರದ ಆದೇಶದಂತೆ ಅರಣ್ಯ ಇಲಾಖೆಯ ಲಾಗಿಂಗ್ ಕಾಮಗಾರಿಯನ್ನು ನಿರ್ವಹಿಸಲು ರಾಜ್ಯದಲ್ಲಿ ಏಳು ಘಟಕಗಳನ್ನು ಹೊಂದಿದ್ದು, ಅರಣ್ಯ ಇಲಾಖೆಯಿಂದ ನಿಗಮಕ್ಕೆ ಹಂಚಿಕೆಯಾಗುವ ಲಾಗಿಂಗ್ ಕಾಮಗಾರಿಯನ್ನು ನಿರ್ವಹಿಸುತ್ತದೆ. ಇದರೊಂದಿಗೆ ನೀಲಗಿರಿ, ಅಕೇಷಿಯ, ಮತ್ತು ಕ್ಯಾಶರಿನೋ, ಮರದ ಪಲ್ಪಟ್ಟನ್ನು ಕಾಗದ ಕಾರ್ಖಾನೆಗಳಿಗೆ ಸರಬರಾಜು ಮಾಡುವುದು ಸಹ ಕಾರ್ಯಗತಗೊಳಿಸುವುದು. ಉರುವಲು ಸೌದೆಯನ್ನು ನಿಗಮದ ಸೌದೆ ಡಿಪೋ ಗಳಲ್ಲಿ ಶೇಖರಿಸಿ ಸಾರ್ವಜನಿಕರಿಗೆ ಮಾರಾಟ ಮಾಡಲಾಗುವುದು. ಇತರೆ ಅರಣ್ಯ ಉತ್ಪನ್ನ ಗಳನ್ನು ಸರ್ಕಾರಿ ಡಿಪೋಗಳಿಗೆ ಸರಬರಾಜು ಮಾಡುವುದು. ಇದಲ್ಲದೇ,  ಅರಣ್ಯ ಆಧಾರಿತ ಉತ್ಪನ್ನಗಳ ತಯಾರಿಕೆಗಾಗಿ ಕಾರ್ಖಾನೆಗಳನ್ನು ಸ್ಥಾಪಿಸಿ ಮರದ ಬಾಗಿಲು, ಕಿಟಕಿ, ಮತ್ತು ಪೀಠೋಪಕರಣಗಳನ್ನು ರಾಜ್ಯದ ಎಲ್ಲಾ ಜಿಲ್ಲೆಗಳ ಸರ್ಕಾರದ ಮತ್ತು ಖಾಸಗಿ ಸಂಸ್ಥೆಗಳ ಕಛೇರಿಗಳಿಗೆ ಹಾಗೂ ಸಾರ್ವಜನಿಕರಿಗೆ ಅವರ ಬೇಡಿಕೆಯಂತೆ ತಯಾರಿಸಿ,  ಸರಬರಾಜು ಮಾಡುವ ಉದ್ದೇಶವನ್ನು ಹೊಂದಿದೆ. |
| 39 | ಕರ್ನಾಟಕ ಗೇರು ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ಗೇರು ನೆಡುತೋಪುಗಳನ್ನು ಅರಣ್ಯ ಪ್ರದೇಶಗಳಲ್ಲಿ ಬೆಳೆಸಿ ಹಾಗೂ ತನ್ನ ವಶದಲ್ಲಿರುವ ಹಳೆಯ ಗೇರು ನೆಡುತೋಪುಗಳ ನಿರ್ವಹಣೆ ಹಾಗೂ ಕೃಷಿಕರಿಗೆ ಕೃಷಿ ಭೂಮಿಯಲ್ಲಿ ಅಧಿಕ ಇಳುವರಿ ನೀಡುವ ಕಸಿ ಗೇರು ಗಿಡಗಳನ್ನು ಬೆಳೆಸಲು ಕಸಿ ಗೇರು ಗಿಡಗಳನ್ನು ಪೂರೈಸುತ್ತಲಿದೆ. |
| 40 | ಅರಣ್ಯ ವಸತಿ ಮತ್ತು ವಿಹಾರಧಾಮಗಳ ಸಂಸ್ಥೆ | ನಿಗಮವು ಪ್ರವಾಸೋದ್ಯಮದ ಕಾರ್ಯಚಟುವಟಿಕೆಗಳ ಬಗ್ಗೆ ಕಾರ್ಯನಿರ್ವಹಿಸುತ್ತಿದೆ. |
| 41 | ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ರಾಜ್ಯಕ್ಕೆ ಭೇಟಿ ನೀಡುವ ದೇಶೀಯ ಹಾಗೂ ಅಂತರಾಷ್ಟ್ರೀಯ ಪ್ರವಾಸಿಗರಿಗೆ ಉತ್ತಮ ಗುಣಮಟ್ಟದ ವಸತಿ, ಸಾರಿಗೆ, ಪ್ರವಾಸ ಪ್ಯಾಕೇಜುಗಳು ಹಾಗೂ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದಲ್ಲಿ ಸಫಾರಿ ಸೇವೆಗಳನ್ನು |

| | | |
|---|---|---|
| | | ಒದಗಿಸುತ್ತದೆ. |
| 42 | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ | ಸಂಸ್ಥೆಯು ಕರ್ನಾಟಕ ರಾಜ್ಯದಲ್ಲಿ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ದೀರ್ಘಾವಧಿ ಹಣಕಾಸಿನ ಅಗತ್ಯಗಳನ್ನು ಪೂರೈಸುತ್ತಿದೆ. |
| 43 | ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತ | ನಿಗಮವು ಮದ್ಯ ಹಾಗೂ ಮದ್ಯಸಾರದ ನಿರ್ವಹಣೆಯ ಕಾರ್ಯದ ಏಕೈಕ ಸಂಸ್ಥೆಯಾಗಿದ್ದು, ರಾಜ್ಯದಲ್ಲಿ ದಕ್ಷ, ಸಮಾನ ಮತ್ತು ಪಾರದರ್ಶಕ ವಿಧಾನದಿಂದ ಸುಂಕ ಪಾವತಿಸಿದ ಮದ್ಯ ಹಾಗೂ ಮದ್ಯಸಾರ ಮಾರಾಟದ ಮೂಲಕ ಸರ್ಕಾರದ ಆದಾಯವನ್ನು ಹೆಚ್ಚಿಸುವ ಉದ್ದೇಶದಿಂದ ಸ್ಥಾಪಿಸಲಾಗಿರುತ್ತದೆ. |
| 44 | ಕರ್ನಾಟಕ ಮೀನುಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ರಾಜ್ಯದ ಕರಾವಳಿಯಲ್ಲಿ ಮೀನುಗಾರರಿಗೆ ಅನುಕೂಲವಾಗುವಂತೆ ಮೂಲಭೂತ ಸೌಕರ್ಯಗಳನ್ನು ನಿರ್ಮಿಸಿದ್ದು, ಮಂಜುಗಡ್ಡೆ ಸ್ಥಾವರ ಮತ್ತು ಶೀತಲ ಸರಪಣಿ, ಮೀನು ಆಹಾರ ಮತ್ತು ಮೀನು ಎಣ್ಣೆ ಸ್ಥಾವರ, ಆಧುನಿಕ ಮೀನು ಸಂಸ್ಕರಣಾ ಸ್ಥಾವರ, ಪರ್ಸೀನ್ ಮೀನು ಮಾರಾಟ, ಮೀನುಗಾರರಿಗೆ ರಿಯಾಯಿತಿ ದರದಲ್ಲಿ ಡೀಸಲ್ ಸರಬರಾಜು ಮತ್ಸ್ಯಾಶ್ರಯ ಯೋಜನೆ, ವ್ಯವಸ್ಥಿತ ಮೀನು ಮಾರುಕಟ್ಟೆಗಳ ನಿರ್ಮಾಣ ಮತ್ತು ಮೀನು ಉಪಹಾರ ಗೃಹ ಹಾಗೂ ಹವಾನಿಯಂತ್ರಿತ ಮೀನು ಮಾರಾಟ ಮಳಿಗೆಗಳನ್ನು ಸ್ಥಾಪಿಸಿ ಮೀನುಗಾರಿಕೆ ಕ್ಷೇತ್ರದಲ್ಲಿ ತನ್ನ ಚಟುವಟಿಕೆಗಳನ್ನು ವಿಸ್ತರಿಸಿಕೊಂಡಿದೆ. |
| 45 | ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ದಿ ನಿಗಮ ನಿಯಮಿತ | • ವಿಶೇಷ ಘಟಕ ಯೋಜನೆ/ಗಿರಿಜನ ಉಪಯೋಜನೆ ಯಡಿ ಕುರಿ/ಮೇಕೆ ಸಾಕಾಣಿಕೆಗೆ ಆರ್ಥಿಕ ನೆರವು<br>• ಆರ್.ಕೆವಿವೈ 10+1 ಕುರಿ ಮತ್ತು ಮೇಕೆ ಸಾಕಾಣಿಕೆಗೆ ಆರ್ಥಿಕ ನೆರವು<br>• ಕುರಿಗಾರರಿಗೆ ಪರಿಕರಗಳ ಕಿಟ್ ವಿತರಣೆ<br>• ರಾಷ್ಟೀಯ ಜಾನವಾರು ಮಿಷನ್ (ಎನ್.ಎಲ್.ಎಂ) ಯೋಜನೆಯಡಿ ಬಂಡೂರು ತಳಿ ಅಭಿವೃದ್ದಿ ಯೋಜನೆ.<br>• ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಅಭಿವೃದ್ಧಿಗೆ ಒಂದಾವರ್ತಿ ಪ್ರೋತ್ಸಾಹ ಯೋಜನೆ<br>• ದನಗೂರು ತಳಿ ಸಂವರ್ಧನಾ ಕ್ಷೇತ್ರದಿಂದ ರಿಯಾಯಿತಿ ದರದಲ್ಲಿ ಮೂರು ತಿಂಗಳ ಬಂಡೂರು ತಳಿ ಗಂಡು ಮರಿಗಳನ್ನು ಬಿತ್ತನೆಗಾಗಿ ವಿತರಣೆ ಮಾಡುವುದು<br>• ನಿವೇಶನ ಹೊಂದಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳಿಗೆ ಉಣ್ಣೆ ಮತ್ತು ಚರ್ಮ ಸಂಗ್ರಹಣಾ ಗೋದಾವುಗಳ ನಿರ್ಮಾಣಕ್ಕೆ ಸಹಾಯ ಧನ. ವಿಶೇಷ ಘಟಕ ಯೋಜನೆ/ಗಿರಿಜನ ಉಪಯೋಜನೆ ಯಡಿ ಕುರಿ/ಮೇಕೆ ಸಾಕಾಣಿಕೆಗೆ ಆರ್ಥಿಕ ನೆರವು<br>• ಆರ್.ಕೆವಿವೈ 10+1 ಕುರಿ ಮತ್ತು ಮೇಕೆ ಸಾಕಾಣಿಕೆಗೆ ಆರ್ಥಿಕ ನೆರವು<br>• ಕುರಿಗಾರರಿಗೆ ಪರಿಕರಗಳ ಕಿಟ್ ವಿತರಣೆ<br>• ರಾಷ್ಟೀಯ ಜಾನವಾರು ಮಿಷನ್ (ಎನ್.ಎಲ್.ಎಂ) ಯೋಜನೆಯಡಿ ಬಂಡೂರು ತಳಿ ಅಭಿವೃದ್ದಿ ಯೋಜನೆ. |

| | | |
|---|---|---|
| | | • ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಅಭಿವೃದ್ಧಿಗೆ ಒಂದಾವರ್ತಿ ಪ್ರೋತ್ಸಾಹ ಯೋಜನೆ<br>• ದನಗೂರು ತಳಿ ಸಂವರ್ಧನಾ ಕ್ಷೇತ್ರದಿಂದ ರಿಯಾಯಿತಿ ದರದಲ್ಲಿ ಮೂರು ತಿಂಗಳ ಬಂಡೂರು ತಳಿ ಗಂಡು ಮರಿಗಳನ್ನು ಬಿತ್ತನೆಗಾಗಿ ವಿತರಣೆ ಮಾಡುವುದು<br>ನಿವೇಶನ ಹೊಂದಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳಿಗೆ ಉಣ್ಣೆ ಮತ್ತು ಚರ್ಮ ಸಂಗ್ರಹಣಾ ಗೋದಾವುಗಳ ನಿರ್ಮಾಣಕ್ಕೆ ಸಹಾಯ ಧನ. |
| 46 | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ರಸ್ತೆಗಳು ಮತ್ತು ಬೃಹತ್ ಸೇತುವೆಗಳನ್ನು ನಿರ್ಮಿಸುವ ಕಾರ್ಯವನ್ನು ಮಾಡುತ್ತದೆ. |
| 47 | ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮ ನಿಯಮಿತ | ಸಂಸ್ಥೆಯು ರಾಜ್ಯ ಸರ್ಕಾರದ ಸಂಪೂರ್ಣ ಸ್ವಾಮ್ಯಕ್ಕೆ ಒಳಪಟ್ಟ ಉದ್ದಿಮೆಯಾಗಿದೆ |
| 48 | ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ | ನಿಗಮವು ಸರ್ಕಾರದ ಒಂದು ಅಂಗ ಸಂಸ್ಥೆಯಾಗಿದ್ದು, ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಡಿತರ ವಿತರಣಾ ಕಾರ್ಯವನ್ನು ನಿರ್ವಹಿಸುತ್ತಿದೆ. |
| 49 | ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ | ಸಂಸ್ಥೆಯು ರೇಷ್ಮೆಗೂಡಿನಿಂದ ರೇಷ್ಮೆ ದಾರವನ್ನು ತಯಾರಿಸಿ ಜೊತೆಗೆ ರೇಷ್ಮೆ ಸೀರೆಗಳನ್ನು ತಯಾರಿಸಲಾಗುತ್ತಿದೆ. |
| 50 | ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ಪೊಲೀಸ್ ಮತ್ತು ಇತರೆ ಸಂಬಂಧಿಸಿದ ಇಲಾಖೆಗಳಿಗೆ ವಸತಿ ಮತ್ತು ವಸತಿಯೇತರ ಕಟ್ಟಡಗಳನ್ನು ನಿರ್ಮಾಣ ಮಾಡುವುದು ಇದರ ಮುಖ್ಯ ಉದ್ದೇಶವಾಗಿರುತ್ತದೆ. |
| 51 | ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ | ರಾಜ್ಯ ಸರ್ಕಾರದ ವಸತಿ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿದೆ. |
| 52 | ಕರ್ನಾಟಕ ರಾಜ್ಯ ಉಗ್ರಾಣ ನಿಗಮ | ಸಂಸ್ಥೆಯು ರಾಜ್ಯದ ರೈತರಿಗೆ/ಠೇವಣಿದಾರರಿಗೆ/ವ್ಯಾಪಾರಸ್ಥರಿಗೆ/ಸಾರ್ವಜನಿಕರಿಗೆ/ಸರ್ಕಾರದ ಸಂಘ ಸಂಸ್ಥೆಗಳಿಗೆ/ ಸರ್ಕಾರದ ಇಲಾಖೆಗಳಿಗೆ ವೈಜ್ಞಾನಿಕ ಸಂಗ್ರಹಣಾ ಸೌಲಭ್ಯ ಒದಗಿಸುವುದು. |
| 53 | ಶ್ರೀ ಕಂಠೀರವ ಸ್ಟುಡಿಯೋ ನಿಯಮಿತ | ನಿಯಮಿತದಲ್ಲಿ ಕನ್ನಡ ಚಲನ ಚಿತ್ರೋದ್ಯಮ ಹಾಗೂ ಕಿರು ಚಿತ್ರೋದ್ಯಮಗಳಿಗೆ ಚಿತ್ರೀಕರಣಗಳಿಗೆ ಬೇಕಾಗುವ ಎಲ್ಲಾ ಸವಲತ್ತುಗಳನ್ನು ರಿಯಾಯತಿ ದರದಲ್ಲಿ ನೀಡಿ ಚಿತ್ರೋದ್ಯಮ ಬೆಳವಣಿಗೆಗೆ ಪ್ರೋತ್ಸಾಹ ನೀಡುವ ಸಲುವಾಗಿ ಬಾಡಿಗೆ ಆಧಾರದ ಮೇಲೆ ಸ್ಥಳಾವಕಾಶವನ್ನು ಕಲ್ಪಿಸಲಾಗುತ್ತಿದೆ. ಇದರಿಂದ ಬರುವ ಬಾಡಿಗೆ ಹಣದಿಂದ ಸ್ಟುಡಿಯೋದ ನಿರ್ವಹಣೆ ಮಾಡಲಾಗುತ್ತಿದೆ. |
| 54 | ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ | ಸಂಸ್ಥೆಯು ಈ ಕೆಳಕಂಡ ಚಟುವಟಿಕೆಗಳನ್ನು ನಿರ್ವಹಿಸುತ್ತಿದೆ:<br>• ಐ.ಟಿ. ಸೇವೆಗಳು |

| | | |
|---|---|---|
| | | • ಐ.ಟಿ. ಶಿಕ್ಷಣ ಸೇವೆಗಳು<br>• ಮಾನವ ಸಂಪನ್ಮೂಲ ಸೇವೆಗಳು<br>• ಮೂಲಭೂತ ಸೌಕಾರ್ಯ ಅಭಿವೃದ್ಧಿ. |
| 55 | ಡಾ.ಬಾಬು ಜಗಜೀವನ ರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ(ಲಿಡ್ಕರ್) | ನಿಗಮವು ಸಮಾಜ ಕಲ್ಯಾಣ ಇಲಾಖೆಯಡಿ ಕಾರ್ಯ ನಿರ್ವಹಿಸುತ್ತಿದೆ. ರಾಜ್ಯದಾದ್ಯಂತ ಪರಿಶಿಷ್ಟ ಜಾತಿಯ ಮಾದಿಗ, ಸಮಗಾರ, ಡೋರ, ಮೋಚಿ ಮತ್ತು ಚಮ್ಮಾರ ಜನಾಂಗಕ್ಕೆ ಸೇರಿದ ಬಡ ಚರ್ಮಕುಶಲಕರ್ಮಿಗಳ ಶ್ರೇಯೋಭಿವೃದ್ಧಿಗಾಗಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸುತ್ತಿರುವ ಸಂಸ್ಥೆಯಾಗಿರುತ್ತದೆ. |
| 56 | ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ನಿಗಮ ನಿಯಮಿತ | ನಿಗಮವು ರಾಜ್ಯದಲ್ಲಿರುವ ಪರಿಶಿಷ್ಟ ಪಂಗಡದವರ ಆರ್ಥಿಕ ಅಭಿವೃದ್ಧಿಗೆ ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ:<br>• ಸ್ವಯಂ ಉದ್ಯೋಗ(ನೇರಸಾಲ) ಯೋಜನೆ<br>• ಉದ್ಯಮ ಶೀಲತಾ ಯೋಜನೆ<br>• ಪ್ರೇರಣಾ ಮೈಕ್ರೋ ಕ್ರೆಡಿಟ್ (ಕಿರುಸಾಲ) ಯೋಜನೆ<br>• ಭೂ ಒಡೆತನ ಯೋಜನೆ<br>• ಗಂಗಾ ಕಲ್ಯಾಣ ಯೋಜನೆ<br>• ಅಲೆಮಾರಿ/ಅರೆ ಅಲೆಮಾರಿ ಸಮುದಾಯದ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು. |
| 57 | ಡಾ. ಬಿ.ಆರ್ ಅಂಬೇಡ್ಕರ್ ಅಭಿವೃದ್ಧಿ ನಿಗಮ | ನಿಗಮದಲ್ಲಿ ಪರಶಿಷ್ಟ ಜಾತಿಯ ಆರ್ಥಿಕವಾಗಿ ಹಿಂದುಳಿದ ಫಲಾಪೇಕ್ಷಿಗಳಿಗೆ ಸಹಾಯಧನ ಹಾಗೂ ಸಾಲಸೌಲಭ್ಯವನ್ನು ನೀಡಿ ಅವರನ್ನು ಆರ್ಥಿಕವಾಗಿ ಸದೃಢವಾಗಲು ಸಹಕಾರಿಯಾಗಿರುತ್ತದೆ. |
| 58 | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ಹಿಂದುಳಿದ ವರ್ಗಗಳ ಜನರ ಆರ್ಥಿಕ ಅಭಿವೃದ್ಧಿಗಾಗಿ ಸ್ವಯಂ ಉದ್ಯೋಗ ಸಾಲಯೋಜನೆ, ಅರಿವು ಶೈಕ್ಷಣಿಕ ಸಾಲ, ಗಂಗಾ ಕಲ್ಯಾಣ ನೀರಾವರಿ ಯೋಜನೆ, ಕೌಶಲ್ಯಾಭಿವೃದ್ಧಿ ತರಬೇತಿ, ಸ್ವಯಂ ಉದ್ಯೋಗ ಯೋಜನೆ, ಸಾಂಪ್ರದಾಯಿಕ ವೃತ್ತಿದಾರರ ಸಾಲ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ. |
| 59 | ಕರ್ನಾಟಕ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ | ನಿಗಮದಲ್ಲಿ ಇರುವ ಯೋಜನೆಗಳಿಗೆ ಸರ್ಕಾರದಿಂದ ನೀಡುವ ಅನುದಾನವನ್ನು ಫಲಾನುಭವಿಗಳಿಗೆ ಕನಿಷ್ಟ ಬಡ್ಡಿ ದರದಲ್ಲಿ ಸಾಲ ಮೊತ್ತವನ್ನು ನೀಡಲಾಗುತ್ತದೆ. ಈ ನಿಗಮದ ಉದ್ದೇಶವು ಅಲ್ಪಸಂಖ್ಯಾತರ ಕಲ್ಯಾಣ ಹಾಗೂ ಸ್ವಾವಲಂಬನೆಗೆ ಬೆಂಬಲವನ್ನು ನೀಡಲಾಗುತ್ತಿದೆ. |
| 60 | ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ | ನಿಗಮವು ಸಮಾಜದ ದುರ್ಬಲ, ಶೋಷಿತ ಮತ್ತು ಅಸಹಾಯಕ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗೆ ಸರ್ಕಾರವು ಜಾರಿಗೆ ತರುವ ಯೋಜನೆಗಳನ್ನು ಅನುಷ್ಠಾನಗೊಳಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ. |

## ಅನುಬಂಧ-2

(ರೂ. ಕೋಟಿಗಳಲ್ಲಿ)

| ಕ್ರ. ಸಂ | ಸಾರ್ವಜನಿಕ ಉದ್ದಿಮೆಯ ಹೆಸರು | 2020-21 | |
|---|---|---|---|
| | | ವಹಿವಾಟು | ಲಾಭ/ನಷ್ಟ |
| 1. | ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಷನ್ ಲಿಮಿಟೆಡ್ ನಿಯಮಿತ | 1104.24 | 472.66 |
| 2. | ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ | 599.69 | 208.56 (ತೆರಿಗೆ ಮುನ್ನ) |
| 3. | ಕರ್ನಾಟಕ ಸಾಬೂನು ಮತ್ತು ಮಾರ್ಜಕ | 787.00 | 115.00 |
| 4. | ಮೈಸೂರ್ ಪೇಯಿಂಟ್ಸ್ & ವಾರ್ನಿಷ್ ಲಿಮಿಟೆಡ್ | 39,74.57 | 674.87 |
| 5. | ಕರ್ನಾಟಕ ವಿದ್ಯುತ್ ಕಾರ್ಖಾನೆ ನಿಯಮಿತ | 97.02 | 84.24 ಲಕ್ಷ (ತೆರಿಗೆ ಮುನ್ನ) |
| 6. | ದಿ ಮೈಸೂರ್ ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ಲಿಮಿಟೆಡ್ | ಲೆಕ್ಕಪತ್ರಗಳ ಪರಿಶೀಲನೆ ಪ್ರಕ್ರಿಯೆ ಅಂತಿಮ ಹಂತದಲ್ಲಿದೆ | |
| 7. | ಮೈಸೂರು ಕಾಗದ ಕಾರ್ಖಾನೆ ನಿಯಮಿತ ಲಿಮಿಟೆಡ್ | ಸಂಸ್ಥೆಯು ನಷ್ಟದಲ್ಲಿದ್ದು ಕಾರ್ಖಾನೆಯ ಎಲ್ಲಾ ಉತ್ಪಾದನಾ ಘಟಕವನ್ನು ಸ್ಥಗಿತಗೊಳಿಸಲಾಗಿರುತ್ತದೆ. | |
| 8. | ಮೈಸೂರು ಸಕ್ಕರೆ ಕಂಪನಿ ನಿಯಮಿತ | ನಿಗಮವು ನಷ್ಟದಲ್ಲಿರುತ್ತದೆ | |
| 9. | ಎನ್ ಜಿ ಇಎಫ್ (ಹುಬ್ಬಳ್ಳಿ ) ನಿಯಮಿತ | 130.87 | 1.82 |
| 10. | ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ | 87.95 | 43.83 |
| 11. | ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ | 91,19,60,000 | ** 14,42,23,000 |
| 12. | ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ | ಲೆಕ್ಕ ಪತ್ರವನ್ನು ಅಂತಿಮಗೊಳಿಸುವ ಪ್ರಕ್ರಿಯೆ ಜಾರಿಯಲ್ಲಿರುತ್ತದೆ | |
| 13. | ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿ., | 1.02 | -2.02(ನಷ್ಟ) |

| | | | |
|---|---|---|---|
| 14. | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ | ನಿಗಮವು ನಷ್ಟದಲ್ಲಿರುತ್ತದೆ | |
| 15. | ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿ., | 2473.33 | 1.91.45 |
| 16. | ಮಾರ್ಕೆಟಿಂಗ್ ಕನ್ಸಲ್ಟೆಂಟ್ಸ್ ಅಂಡ್ ಏಜೆನ್ಸೀಸ್ | 235.14 | ** 7.40 |
| 17. | ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ | 276386.99 | 5326.11 |
| 18. | ಕರ್ನಾಟಕ ವಿದ್ಯುತ್ ನಿಗಮ ನಿಯಮಿತ | 6047.01 | #323.65 |
| 19. | ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ | ಲೆಕ್ಕಪತ್ರಗಳ ಪರಿಶೀಲನೆ ಪ್ರಕ್ರಿಯೆ ಅಂತಿಮ ಹಂತದಲ್ಲಿದೆ | |
| 20. | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ | *19680.84 | *208.25 |
| 21. | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ | * 7890.45 | - |
| 22. | ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿ ನಿಯಮಿತ | * 3793.28 | - |
| 23. | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ | *4593.25 | ಪ್ರಸ್ತುತ ನಿಗಮವು ನಷ್ಟದಲ್ಲಿರುತ್ತದೆ |
| 24. | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ | *5405.24 | - |
| 25. | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಿತ | - | - |
| 26. | ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ | *1467.87 | - |
| 27. | ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ | 1282.47 | ಪ್ರಸ್ತುತ ನಿಗಮವು ನಷ್ಟದಲ್ಲಿರುತ್ತದೆ |
| 28. | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ | - | * 1853.06 |
| 29. | ಡಿ. ದೇವರಾಜ ಅರಸ್ ಟರ್ಮಿನಲ್ಸ್ ಲಿಮಿಟೆಡ್ | ಕಂಪನಿಯು ನಷ್ಟದಲ್ಲಿದೆ | |
| 30. | ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ | - | - |
| 31. | ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗೂ ರಫ್ತು ನಿಗಮ ನಿಯಮಿತ | - | - |
| 32. | ಕರ್ನಾಟಕ ರಾಜ್ಯ ದ್ವಿದಳ ಧಾನ್ಯಗಳ ಅಭಿವೃದ್ಧಿ ಮಂಡಳಿ ನಿಯಮಿತ | - | - |
| 33. | ಕರ್ನಾಟಕ ಕಾಂಪೋಸ್ಟ್ ಅಭಿವೃದ್ಧಿ ನಿಗಮ ನಿಯಮಿತ | 5.2503 | - |

| | | | |
|---|---|---|---|
| 34. | ಕಾವೇರಿ ನೀರಾವರಿ ನಿಗಮ ನಿಯಮಿತ | - | *11.40 |
| 35. | ಕರ್ನಾಟಕ ನೀರಾವರಿ ನಿಗಮ ನಿಯಮಿತ | ನಿಗಮವು ಯಾವುದೇ ಲಾಭಾಧಾರಿತ ಕಂಪನಿಯಾಗಿರುವುದಿಲ್ಲ. | |
| 36. | ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ | 6328.11 | ಪ್ರಸ್ತುತ ನಿಗಮವು ನಷ್ಟದಲ್ಲಿರುತ್ತದೆ |
| 37. | ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ | ** 7287.67 (ಲಕ್ಷ) | - |
| 38. | ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ | - | - |
| 39 | ಕರ್ನಾಟಕ ಗೇರು ಅಭಿವೃದ್ಧಿ ನಿಗಮ ನಿಯಮಿತ | 14,38,30,674 | 27.87 (ಲಕ್ಷ) |
| 40. | ಅರಣ್ಯ ವಸತಿ ಮತ್ತು ವಿಹಾರ ಧಾಮಗಳ ಸಂಸ್ಥೆ | 53.34 | 40.57 (ಲಕ್ಷ) |
| 41 | ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತ | - | ಪ್ರಸ್ತುತ ನಿಗಮವು ನಷ್ಟದಲ್ಲಿರುತ್ತದೆ |
| 42. | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ | 360.90 | 42.89 |
| 43. | ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತ | 29816.12 | 57.72 |
| 44. | ಕರ್ನಾಟಕ ಮೀನುಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ | 153,02,01,477 | ಪ್ರಸ್ತುತ ನಿಗಮವು ಲಾಭದಲ್ಲಿರುತ್ತದೆ |
| 45. | ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ | ಲೆಕ್ಕಪತ್ರಗಳ ಪರಿಶೀಲನೆ ಪ್ರಕ್ರಿಯೆ ಅಂತಿಮ ಹಂತದಲ್ಲಿದೆ | |
| 46. | ಕರ್ನಾಟಕ ರಾಜ್ಯ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ | 78.49 | - |
| 47 | ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮ ನಿಯಮಿತ | 3801.40 | 287.98 |
| 48. | ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿ., | 2151.81 | ಪ್ರಸ್ತುತ ನಿಗಮವು ಲಾಭದಲ್ಲಿರುತ್ತದೆ |
| 49. | ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ | 153.60 | 28.10 |
| 50. | ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮನಿ., | 347.66 | 6.72 |
| 51. | ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ | ನಿಗಮವು ಲಾಭ ನಷ್ಟ ರಹಿತ ಸಂಸ್ಥೆಯಾಗಿದೆ. | |
| 52. | ಕರ್ನಾಟಕ ರಾಜ್ಯ ಉಗ್ರಾಣ ನಿಗಮ | 138.41 | 23.68 |
| 53. | ಶ್ರೀ ಕಂಠೀರವ ಸ್ಟುಡಿಯೋ ನಿ., | ಪ್ರಸ್ತುತ ನಿಗಮವು ನಷ್ಟದಲ್ಲಿರುತ್ತದೆ. | |

| | | | |
|---|---|---|---|
| 54. | ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ | 630.22 | 25.07 |
| 55. | ಡಾ.ಬಾಬು ಜಗಜೀವನರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ (ಲಿಡ್ಕರ್) | 2463.19 | ಪ್ರಸ್ತುತ ನಿಗಮವು ಲಾಭದಲ್ಲಿರುತ್ತದೆ |
| 56. | ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ನಿಗಮ ನಿ., | ನಿಗಮವು ಅಭಿವೃದ್ಧಿ ನಿಗಮವಾಗಿರುವುದರಿಂದ ಲಾಭ/ನಷ್ಟ ಎಂಬ ಪ್ರಶ್ನೆ ನಿಗಮಕ್ಕೆ ಅನ್ವಯಿಸುವುದಿಲ್ಲ. | |
| 57. | ಡಾ. ಬಿ.ಆರ್ ಅಂಬೇಡ್ಕರ್ ಅಭಿವೃದ್ಧಿ ನಿಗಮ | ನಿಗಮವು ಒಂದು ಸೇವಾ ಮನೋಭಾವವುಳ್ಳ ಸಂಸ್ಥೆಯಾಗಿರುತ್ತದೆ. | |
| 58. | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿ., | ಪ್ರಸ್ತುತ ನಿಗಮವು ನಷ್ಟದಲ್ಲಿರುತ್ತದೆ. | |
| 59. | ಕರ್ನಾಟಕ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ | ಅನ್ವಯಿಸುವುದಿಲ್ಲ | |
| 60. | ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ | ನಿಗಮವು ಒಂದು ಸೇವಾ ಮನೋಭಾವವುಳ್ಳ ಸಂಸ್ಥೆಯಾಗಿರುತ್ತದೆ. ಆದ್ದರಿಂದ ಲಾಭ-ನಷ್ಟದ ಪ್ರಶ್ನೆ ಉದ್ಭವಿಸುವುದಿಲ್ಲ | |

***ತಾತ್ಕಾಲಿಕ

# ತೆರಿಗೆ ನಂತರ ಲಾಭ

** ಲೆಕ್ಕಪರಿಶೋಧನಾ ಹಂತದಲ್ಲಿದೆ

ಅನುಬಂಧ-3

ಪ್ರಸ್ತುತ ಸಾಲಿನಲ್ಲಿ ನಷ್ಟದಲ್ಲಿರುವ ಉದ್ದಿಮೆಗಳು

| ಕ್ರ.ಸಂ | ಪ್ರಸ್ತುತ ಸಾಲಿನಲ್ಲಿ ನಷ್ಟದಲ್ಲಿರುವ ಸಾರ್ವಜನಿಕ ಉದ್ದಿಮೆಗಳು |
|---|---|
| 1 | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ |
| 2 | ಕರ್ನಾಟಕ ನೀರಾವರಿ ನಿಗಮ ನಿಯಮಿತ |
| 3 | ಮೈಸೂರು ಕಾಗದ ಕಾರ್ಖಾನೆ ನಿಯಮಿತ |
| 4 | ಮೈಸೂರು ಸಕ್ಕರೆ ಕಂಪನಿ ನಿಯಮಿತ |
| 5 | ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ |
| 6 | ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ |
| 7 | ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿಯಮಿತ |
| 8 | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ |
| 9 | ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ |
| 10 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ |
| 11 | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ |
| 12 | ಕರ್ನಾಟಕ ಕಾಂಪೋಸ್ಟ್ ಅಭಿವೃದ್ಧಿ ನಿಗಮ ನಿಯಮಿತ |
| 13 | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ |
| 14 | ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ |
| 15 | ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ |
| 16 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ |
| 17 | ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ |
| 18 | ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ |
| 19 | ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ |
| 20 | ಕರ್ನಾಟಕ ರಾಜ್ಯ ಉಗ್ರಾಣ ನಿಗಮ |
| 21 | ಶ್ರೀ ಕಂಠೀರವ ಸ್ಟುಡಿಯೋ ನಿಯಮಿತ |